ಒಂದಾಣೆ ಮಾಲೆ 255

# ವೈರಾಗ್ಯ ಶತಕ

## (ಅಪ್ಪಯ್ಯ ದೀಕ್ಷಿತ ಕೃತ)



ಸಂಗ್ರಾಹಕ, ಅನುವಾದಕ:
ಶ್ರೀ ಕೆ. ವೆಂಕಟರಾಯಾಚಾರ್ಯ, ವಿದ್ವಾನ್, ಸುರತ್ಕಲ್ಲು.



1959

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

## ಪ್ರತಿ ವಾರವೂ ಕೊಂಡುಕೊಳ್ಳಿರಿ!

“ಒಂದಾಣೆ ಮಾಲೆ”ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1959ನೇ ಅಕ್ಟೋಬರ ತಿಂಗಳ ನಾಲ್ಕನೆಯ ವಾರದ ವರೆಗೆ 255 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕವು ಹೊರಡುತ್ತಲೇ ಇದೆ.

255 ಆಣೆಗಳಿಗೆ ‘ಒಂದಾಣೆ ಮಾಲೆ’ಯು, ಹೊದಿಕೆ ಕೂಡಿ, ಒಟ್ಟು 4902 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಬೆಲೆಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ ‘ಒಂದಾಣೆ ಮಾಲೆ’ಗೆ ಬರೆಯುತ್ತಾರೆ. ‘ಅಶ್ಲೀಲ’ ಎಂಬ ಅಂಶವೇ ‘ಒಂದಾಣೆ ಮಾಲೆ’ಯ ಪ್ರಕಟಣೆಗಳಲ್ಲಿರುವುದಿಲ್ಲ.

‘ಒಂದಾಣೆ ಮಾಲೆ’ ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

‘ಒಂದಾಣೆ ಮಾಲೆ’ ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ-ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ಲಘು ಪರಿಚಯದ ಮಾತುಗಳು.

ಅಪ್ಪಯ್ಯ ದೀಕ್ಷಿತರು ಅದ್ವೈತಮತಾನುಯಾಯಿಗಳೆಂದು ಈ ಶತಕದ ಕೆಲವು ವಾಕ್ಯಗಳಿಂದಲೂ ಸುವೇದ್ಯವಾಗುತ್ತದೆ. ಇವರು ಹದಿನಾರನೆಯ ಶತಕದಲ್ಲಿದ್ದರೆಂದು ತಿಳಿದುಬರುವುದು. ಈ ಕಾಲದಲ್ಲಿ ವಿಜಯನಗರದ ಕೃಷ್ಣದೇವರಾಯಾದಿ ರಾಜರು ಆಳುತ್ತಿದ್ದರು. ದ್ವೈತ ಅದ್ವೈತ ಮತೀಯ ಚರ್ಚಾ ಗ್ರಂಥಗಳು—ಮಧ್ವಮತವಿಧ್ವಂಸಾದಿ ಗ್ರಂಥಗಳು ಅಪ್ಪಯ್ಯ ದೀಕ್ಷಿತರವು, ಪಾಷಂಡಮತ ಖಂಡನಾದಿ ಏತದ್ವಿರುದ್ಧ ಗ್ರಂಥಗಳು ಶ್ರೀ ವಾದಿರಾಜಾದಿಯರವು—ವಿಪುಲವಾಗಿ ರೂಪುಗೊಂಡವು. ಅಪ್ಪಯ್ಯ ದೀಕ್ಷಿತರ ಕೃತಿಗಳು ಹಲವಾರು ತೆರೆದವು; ಕೆಲವು ವೇದಾಂತಮಯವಾದರೆ, ಕೆಲವು ಸುಲಭಾವಗಾಹನೆಯವೂ ಇವೆ. ಇದೇ ಹೆಸರಿನ ಬೇರೆ ಮೂವರು ಕವಿಗಳು ಇದ್ದರೆಂದು ಕವಿಚರಿತೆಯಿಂದ ತಿಳಿಯುವುದಾದರೂ, ಅಪ್ಪಯ್ಯ ದೀಕ್ಷಿತರೆಂದರೆ ಪ್ರಥಮ ಜ್ಞಾನಕ್ಕೆ ಬರುವುದೆಂದರೆ ಇವರ ಹೆಸರೆಂದರೆ—ಇವರ ಸುಪ್ರಸಿದ್ಧಿಗೆ ಸಾಕು! ಇದಲ್ಲದೆ, ಶತಕಗಳನ್ನು ಕಾಣುವಾಗಲೂ ಇವರ ಭಕ್ತಿಶತಕ, ವರದರಾಜ ಶತಕಾದಿಗಳು ಲೋಕಪ್ರಸಿದ್ಧವಾಗಿವೆ. ಇಂತಹವು ಉದ್ದುದ್ದವಾದ ಸಮಾಸ ಥಾಗೂ ಕಠಿಣತಮ ಪದಗಳಿಂದ ಕೂಡಿರುವುದುಂಟು. ಪ್ರಕೃತ ಅನುವಾದಿಸಿದ ವೈರಾಗ್ಯಶತಕವು ಸುಲಭ ಶಬ್ದಗಳಿಂದೂಲ, ಚಿಕ್ಕ ನುಡಿಗುಂಪುಗಳಿಂದಲೂ ಕೂಡಿ ಮನಂಬುಗುತ್ತದೆ, ನಿತ್ಯದಲ್ಲಿ ಪಠಿಸುವವರಿಗೆ ಅನುಕೂಲವಾಗಿದೆ. ಚಿಕ್ಕ ಮಾತಿನಲ್ಲಿ ದೊಡ್ಡ ಸಂಗತಿಯನ್ನು ತಿಳಿಸುವ ಈ ಶತಕದಂತೆ ಇತರ ಕೆಲವು ಕೃತಿಗಳೂ ನಮಗೆ ತಿಳಿಯತಕ್ಕುವೆಂಬುದರಲ್ಲಿ ಅನುಮಾನವಿಲ್ಲ. ಪ್ರಕೃತ ಶತಕದಲ್ಲಿ ಸಂಸಾರವೆಂದರೇನು, ಸ್ತ್ರೀಯರ ಸ್ಥಾನವೇನು, ಹಲವು ಕಷ್ಟಗಳಿದ್ದರೂ ನಮ್ಮ ಕರ್ತವ್ಯವೇನು, ದೇವನ ಶರಣಾಗತಿಯೇ ಮುಕ್ತಿ ಸಾಧನವೆಂದು ವಿವರಿಸಿದೆ. ಮಕ್ಕಳಿಂದ ತೊಡಗಿ ಬ್ರಹ್ಮಜ್ಞಾನಿಗಳನಕ ಎಲ್ಲರೂ ತಿಳಿಯುವಂತೆ ಹೇಳಿದೆ!

# ವೈರಾಗ್ಯ ಶತಕ

## (ಅಪ್ಪಯ್ಯ ದೀಕ್ಷಿತರ ಕೃತಿ)

ಆದೊಬ್ಬ ಭಿಕ್ಷುವು ಹತ್ತು ಅವ್ಯಯುಗಳನ್ನು ಸಂಗ್ರಹಿಸುತ್ತಿದ್ದಾನೆ. ನಾವಾದರೋ ಅವನೊಡನೆ 'ನ ಮಮ' ಎಂಬೆರಡು ಅವ್ಯಯುವನ್ನು ಬೇಡುವೆವಲ್ಲದೆ ಬೇರೇನು ಇರುತ್ತದೆ? (ತನ್ನದಲ್ಲವೆಂಬುದೇ ವೈರಾಗ್ಯ ಮೂಲ!) ಈ ವೈರಾಗ್ಯವೆಂಬ ಸಾಮ್ರಾಜ್ಯವಾದರೋ ಬುದ್ಧಿಯೇ ಮಂತ್ರಿಯಾಗುಳ್ಳುದು, ಧೈರ್ಯವೇ ಬಲವುಳ್ಳುದು, ಸಂಕಲ್ಪದ (ಕಾಮದ) ವಿರೋಧಕವು, ಶಾಂತಿಯೇ ಧನವಾಗುಳ್ಳುದು, ಮೂರು ಲೋಕವೇ ಇದಕ್ಕೆ ಸಂಗತವಾಗಿರುವುದು!

ಲೋಕವು ರಾಜನಿಂದ ಹೆದರುವುದು, ಆ ರಾಜನು ವೈರಿಗಳಿಂದ ಹೆದರುವನು. ಬ್ರಹ್ಮನಿಂದ ಮೊದಲ್ಗೊಂಡು ಯಮನ ತನಕ ಹೆದರದಿರುವುದೆಂದರೆ ನಿರಾಶೆಯೆಂಬ ರಾಜ್ಯವೊಂದು!

ವಿರಾಗಿಗೆ ಭಿಕ್ಷಾದಾತೆಯರೇ ತಾಯಂದಿರು, ಗುರುಗಳೇ ತಂದೆಯಂದಿರು, ಶಿಷ್ಯರೇ ಬಾಲಕರು, ಏಕಾಂತದಲ್ಲಿ ರಮಿಸಲು ಹೇತುವಾದ ಶಾಂತಿಯೇ ಹೆಂಡತಿಯಾಗಿರುವುದು!

ಆದಾರು ಕಾರ್ಯಕಾರಣಗಳ ವಿರಹದಿಂದಲೂ ಅದೇನೂ ಚೇಷ್ಟಿಸಲಾರರೋ, ಆ ಸಂತರೇ ಮುಕ್ತರೆನ್ನುವುದು. ಈ ಬಗೆಗೆ ಸಂದೇಹವಿದ್ದಲ್ಲಿ ಸೂತ್ರಕಾರನಾದ ಗೌತಮನೇ ಸಾಕ್ಷಿಯಾಗಿದ್ದಾನೆ. (ಗೌತಮ ಸೂತ್ರದಲ್ಲಿ ವಿವರ ಇದೆ.)

ಆಕಾಶವು ಬೀಳಲಿ, ಭೂಮಿಯು ಬಿರಿಯಲಿ, ಬೆಟ್ಟಗಳು ಚಲಿಸಲಿ, ಕಡಲುಗಳು ಒಟ್ಟು ಸೇರಲಿ, ಲೋಕವೇ ತಲೆಕೆಳಗಾಗಲಿ, ವಿರಕ್ತನಾದವನಿಗೆ ಹಾನಿಯೇನಿದೆ?

ಆವನ ವಶದಲ್ಲಿ ಮನಸ್ಸು ಇರುತ್ತದೋ, ಅವನ ವಶದಲ್ಲಿದೆ, ಅಖಿಲ ಲೋಕವು! ಅವನಿಗೆ ಕಳ್ಳರು ಯಾರು? ಚಾಡಿಗಾರರು ಯಾರು? ಹಗೆಗಳು ಯಾರು? ಬಂಧುಗಳು ಯಾರು?

ವಿಷಯಗಳು ಸೇರಿಬಂದಿರಲಿ, ಇಂದ್ರಿಯಗಳು ವಿಷಯಗಳೊಡನೆ ಕಲೆತಿರಲಿ, ಒಳಗಿನದೊಂದು ಇಂದ್ರಿಯವು (ಮನಸ್ಸು) ಶಾಂತವಿದ್ದರೆ ಮತ್ತೇತರ ಚಿಂತೆಯಿದೆ?

ವಿಷಯಗಳನ್ನು ಪರಿಹರಿಸಲು ಮೂಢರು ಮೇರುಗುಹೆಯಲ್ಲಿ ವಾಸಿಸಬೇಕೇನು? ಪದ್ಮಗಳು ನೀರಿಂದ ಸಿಂಪಡಿಸದಿರಲೆಂದು ಧಾತುಗಳಲ್ಲಿ ಬೆಳೆಯುವುದಲ್ಲ! (ತಪ್ಪಲಲ್ಲಿ ಬೆಳೆವ ತಾವರೆಗೆ ನೀರಿಲ್ಲದೆಯೂ ಬದುಕ ಬರುವುದಲ್ಲವೇ?)

ಸಂಸಾರವೆಂಬ ರೋಗದಲ್ಲಿ ಮೂಲಕಾರಣವೆಂದರೆ ಅಜ್ಞಾನವಾಗಿದೆ. ಜನನವೇ ಇದರ ಪೂರ್ವರೂಪವು, ಸಂಸಾರವೇ ಇದರ ಪರಿಪಾಕವು, ಇದಕ್ಕೆ ಮದ್ದಾದರೂ ನೈಷ್ಠಿಕವಾದ ಶಾಂತಿಯಾಗಿದೆ. ಸೂಕರ ಜಾತಿಯ ಸ್ಮರಣವುಳ್ಳ ಮನುಷ್ಯನು ತನ್ನಿಂದ ಸೇವಿಸಲ್ಪಟ್ಟ ವಸ್ತುವನ್ನು ಕುರಿತು ದೂರದಲ್ಲಿ ಹೇಸುವಂತೆ ಧೀರನು ವೈರಾಗ್ಯವನ್ನು ಆದರಿಸುತ್ತಾನೆ.

ಧೀರರ ಶಾಂತಿಯಲ್ಲಿ ಕಾಮವಿಕಾರವು—ಕುಮಾರತನದಲ್ಲಿ ಬಾಲ್ಯದಂತೆಯೂ, ತರುಣತನದಲ್ಲಿ ಕೌಮಾರದಂತೆಯೂ, ವೃದ್ಧತನದಲ್ಲಿ ತಾರುಣ್ಯದಂತೆಯೂ—ರುಚಿಸಲಾರದು!

ಧನ್ಯರಾದವರು ಎಲ್ಲೆಡೆ ನೂರಾರು ವಿಷಯಗಳನ್ನು ಪರೀಕ್ಷಿಸಿ ಕೂಡಲೇ ಅವುಗಳನ್ನು ತ್ಯಜಿಸುತ್ತಾರೆ. ಕಾಗೆಗಳು ವಾಂತಿಯ ಅಗುಳನ್ನೆಂಬಂತೆ ಇತರರು ಅವುಗಳನ್ನೇ ಸೇವಿಸುತ್ತಾರೆ!

ತಾಯ್ತಂದೆಯರು ಕೊನೆಯವರು, ಹೆಂಡತಿಯು ಕೊನೆಯವಳು, ಮಕ್ಕಳು ಕೊನೆಯವರು, ಅವರಲ್ಲಿ ಪ್ರೇಮವು ಕರ್ತವ್ಯವಾದರೂ ಧೀರರು ಹೇಗೆ ವಿರಕ್ತರಾಗುವರೋ? (ಹೇಳಲಳವಲ್ಲ! ಅದೇ ಧೀರತನವಾಗಿದೆ.) ಸ್ತ್ರೀಯೆಂಬ ಹೆಸರುಳ್ಳ ಚಂಡಮಾರುತವು ಚಲಿಸುತ್ತಿರಲು ಚಪಲರಾದವರು ತೃಣದಂತೆ ಭ್ರಮಿಸುತ್ತಾರೆ. ಸಂತರು ಪರ್ವತಗಳಂತೆ ಅದರಿಂದ ಒಂದಿಷ್ಟೂ ಅಲುಗುವುದಿಲ್ಲ!

ಶಾಂತಿ ಸುಖದ ರಸಿಕರಾದ ಸಂತರು ಕಾಮಿಗಳಿಗೆ ಉತ್ತಮ ಭೋಗ್ಯವಾದ ಕಾಮಸುಖದಲ್ಲಿ—ಅಮೃತವನ್ನುಣ್ಣುವವರು ಹಿಂದಿಯ ಅನ್ನದಲ್ಲೆಂಬಂತೆ—ಜಿಗುಪ್ಸೆಯನ್ನು ತಳೆಯುವರು. ಕೇವಲ ವಿಕ್ಷೇಪವನ್ನು

ಹೊಂದಿದವರು ವಿಕಾಸದ ತುದಿಯನ್ನು ಏರಿದ ಜ್ಞಾನವುಳ್ಳವರಾಗಿ ಪರಕೀಯನದೆಂಬಂತೆ ತಮ್ಮ ಚೇಷ್ಟೆಗಳನ್ನು ತಾವೇ ಕಾಣುವರು.

ಧೀರರು ಅಸ್ಥಾನದಲ್ಲಿ ಅಭಿಮುಖರಾದ ಹಾಗೂ ಅಸ್ಥಾನದಲ್ಲಿ ಸಂತುಷ್ಟರಾದ ಮೂರ್ಖರನ್ನು—ತಂದೆತಾಯಿಗಳು ಆಡುವ ಮಕ್ಕಳು ಎಂಬಂತೆ—ಅನುಸರಿಸಿರುತ್ತಾರೆ.

ಪುರುಷನು ನೀರಿಂದ ಬೆಳೆಸಲು ಮರವು ಹೂಕಾಯಿಗಳನ್ನು ಅವನಿಗೆ ಬಿಡುವುದು. (ನೀರಿಲ್ಲದಿದ್ದರೆ ಹೂಕಾಯಿ ಬಿಡಲಾರದು.) ಅಂತೆ ಸಂತರು ಉಪಕಾರಿಯಲ್ಲೂ ಅಪಕಾರಿಯಲ್ಲೂ ಸಮವಾಗಿ ವರ್ತಿಸುತ್ತಾರೆ. ಘಟಘಟತ್ವಗಳ ನಿತ್ಯ ಹಾಗೂ ಅನಿತ್ಯವಿವೇಕವು ಎಲ್ಲರಿಗೂ ಇದ್ದೇ ಇದೆ. ಆವುದು ಶಾಂತಿಯನ್ನುಂಟುಮಾಡುವುದೋ ಅದೇ ವಿವೇಕವು, ಮಿಕ್ಕವೆಲ್ಲವೂ ಅವಿವೇಕವಾಗಿದೆ.

ತರುಣನು ಕಾಮಸುಖವು ಕಾಲದಿಂದ ದೊರಕದಿದ್ದರೂ ಹೇಗೆ ಪ್ರವರ್ತಿಸುತ್ತಾನೋ, ಹಾಗೆಯೇ ಒಬ್ಬಾನೊಬ್ಬನು ಭಾಗ್ಯವಶದಿಂದ ಬ್ರಹ್ಮಸುಖದಲ್ಲಿ ಪ್ರವರ್ತಿಸುತ್ತಾನೆ.

ಪುತ್ರರ ಗುಣಗಳು ಸ್ವಾತಂತ್ರ್ಯ ಕಾಲದಲ್ಲಿಯೂ, ಹೆಂಡಿರ ಗುಣಗಳು ತನ್ನ ಪುನರ್ವಿವಾಹ ಕಾಲದಲ್ಲಿಯೂ, ಸೋದರರ ಗುಣಗಳು ಪಾಲುಗಾರಿಕೆಯ ಕಾಲದಲ್ಲಿಯೂ ಮೋಕ್ಷಗಾಮಿಗೆ ತಿಳಿಯುತ್ತವೆ! ಆವನು ಕೊನೆಯುಸಿರ ಹೊತ್ತಿನಲ್ಲೂ ತನಗಾರು ಗತಿಯೆಂದು ಸ್ವಾರ್ಥವನ್ನು ಕೇಳುವನೋ, ಅಂತಹ ಜನಕ್ಕಾಗಿ ಪಾಪಿಗಳು ಪಾಪಗಳನ್ನು ಮಾಡುತ್ತಿದ್ದಾರೆ. (ಪಾಪಗಳನ್ನು ಕಂಡಾದರೂ ಅಂತಹ ಬುದ್ಧಿ ಬಿಡಬೇಕು.)

ಒಂದೆಡೆ ತಂದೆತಾಯಿಯರೊಂದಿಗೆ ಜಗಳಾಡುವುದು, ಇನ್ನೊಂದೆಡೆ ಮಕ್ಕಳನ್ನು ಕುರಿತು ಪಿತೃಭಕ್ತಿಯನ್ನು ಕಲಿಸುವುದು! ಪರಭಾರ್ಯೆಯರನ್ನು ತಾನು ಸೇರುತ್ತಿರುವುದು, ತನ್ನ ಹೆಂಡಿರಿಗೆ ಶಾಸ್ತ್ರಗಳನ್ನು ಓದಿಸುವುದು! (ಇಂತಹ ಅಪಚಾರಗಳು ಸರಿಯಲ್ಲ!)

ದೊರಕದ ವಸ್ತುವಿಂದ ವಿರಕ್ತಿಯೇ ಶಾಂತಿಯು, ಅಯೋಗ್ಯ ರೀತಿಯೇ ದಾನಕೊಳ್ಳುವುದರಿಂದ ತಾನು ಹಿಮ್ಮೊಗವಾಗಿರುವುದು, ದುರ್ಬಲತೆಯೇ ಕ್ಷಮೆಯು, ಕಲಿಯುಗದಲ್ಲಿ ಇವೇ ನಿವೃತ್ತಿಧರ್ಮಗಳೆನಿಸು

ತ್ರವೆ! (ಸಿಕ್ಕಿದುದೂ ಬೇಡವೆನ್ನುವ ಶಾಂತಿ, ದಾನಕೊಡುವವರಿದ್ದರೂ ಕೊಳ್ಳದಿರುವುದು, ಸಬಲನಾಗಿ ಕ್ಷಮೆದೋರುವುದೇ ನಿವೃತ್ತಿಧರ್ಮಗಳಾಗಿವೆ.)

ನೀತಿವಿಧಿ ವೇದಶಾಸ್ತ್ರಗಳನ್ನು ಬಲ್ಲವರಿದ್ದಾರೆ. ಬ್ರಹ್ಮಜ್ಞಾನಿಗಳೂ ಲಭಿಸಬಹುದು. ಆದರೆ, ತಮ್ಮ ಅಜ್ಞಾನವನ್ನು ತಾವೇ ತಿಳಿದವರು ವಿರಳರು!

ತನ್ನ ಮನಸ್ಸು ಕಲುಷಿತವಾಗಿದ್ದರೆ ಲೋಕವು ಋಜುವಾಗಿ (ಪ್ರಾಮಾಣಿಕವಾಗಿ) ಹೇಗೆ ದೊರಕೀತು? ಕಣ್ಣಿನಲ್ಲಿ ದೋಷವು ತುಂಬಿರಲು ಎರಡು ಚಂದ್ರರ ಕಾಣುವಿಕೆಯು ಬೇರೆಲ್ಲಿ ಸಾಗೀತು? ವಿಷಯಗಳನ್ನು ಅನುಕೂಲಿಸಲು ಅದನ್ನು ಹೊಂದುವ ಹೃದಯದಲ್ಲೇ ಯತ್ನವು ಮಾಡಲ್ಪಡಲಿ. ಕಣ್ಣಿಗೆ ಇಕ್ಕುವ ಮದ್ದನ್ನು ನೋಡುವ ವಸ್ತುವಿಗೆ ಕೊಟ್ಟು ಆದಾರು ಸುಖಿಯಾಗುವನು?

ಹೆಂಡಿರಾದವರು ಮಕ್ಕಳಲ್ಲಿ ಆಸಕ್ತರಾದರು, ಮಕ್ಕಳು ಪಿತೃಧನದ ಸ್ವೀಕಾರದಲ್ಲಿ ಗಜಬಜಿಸುವರು, ತಾಯಿಯು ಅಳುವುದನ್ನೇ ಮೊರೆ ಹೊಂದಿದಳು, ಪರಲೋಕಕ್ಕೆ ಸಾಗಿದವನಿಗೆ ಆದಾರು ಬಂಧುವು? (ಅವನಿಗೆ ಶಾಂತಿ-ಧರ್ಮವೊಂದೇ ಬಂಧು, ಇವರಾರೂ ಅಲ್ಲ!)

ಜನರು ಸಾಯುತ್ತಿರುವವರನ್ನು ಕಾಣುತ್ತಾರೆ, ಸಾಯುವವರನ್ನು ಊಹಿಸುತ್ತಾರೆ, ಸತ್ತವರನ್ನು ನೆನೆಯುತ್ತಾರೆ, ಈ ಬಗ್ಗೆ ಏನೆಲ್ಲ ಬೇಡವಾದುದನ್ನು—ಇಲ್ಲದುದನ್ನು—ಹೇಳುತ್ತಾರೆ, ಮತ್ತೂ ನಿತ್ಯದಂತೆ ವ್ಯವಹರಿಸುತ್ತಾರೆ! (ಸಾಯುವವರೇ ಮೊದಲಾದವರನ್ನು ಕಂಡಾದರೂ ಶಾಂತಿ—ಧರ್ಮಗಗಳನ್ನು ಆಚರಿಸಬೇಕು!)

ಮೂಢರು ಜಗಳಾಡುತ್ತಾರೆ, ನಾಳೆ ಬೆಳಗಾತ ಇರುವೆನೆಂದು ಯಾರು ಹೊಣೆಗಾರನು? ಅಷ್ಟೇಕೆ? ಅಂದೇ ರಾತ್ರಿಯಲ್ಲಿ ತನ್ನ ಇರುವಿಕೆಗೆ ಯಾರು ಜವಾಬ್ದಾರಿಯು? (ಜೀವಿತ ನಶ್ವರ, ಧರ್ಮವೇ ಶಾಶ್ವತ!)

ವಿಶಾಲವಾದ ಕೊಳಗಳು ರಚಿತವಾದುವು, ಕಲ್ಲುಗಳಿಂದ ಗೋಡೆಗಳು ಗಟ್ಟಿಯಾಗಿ ಕಟ್ಟಲಾದುವು, ಬಲಿಷ್ಠವಾದ ಎಮ್ಮೆಗಳು ಕ್ರಯಕ್ಕೆ ಕೊಳ್ಳಲಾದುವು, ನಾವು ಕೃತಕೃತ್ಯರಾದೆವೆಂದು ಜನರು ತಿಳಿಯುತ್ತಾರೆ! (ಇವೇನೂ ಪರಲೋಕ ಸಾಧನಗಳಲ್ಲ, ಧರ್ಮವೊಂದೇ ಸಾಧನವು.)

ಮಣಿಗಂಟಿನಿಂದ ತೊಡಗಿ ತಲೆಯ ತನಕ ಒಳಗಡೆ ಕಲ್ಮಷದಿಂದ ಕೊಳೆಯಾದ ದೇಹದಲ್ಲಿ ಗಂಗಾಜಲವೂ—ಕಳ್ಳಿನ ಗಡಿಗೆಯಲ್ಲಿ ದರ್ಭೆಯ ಮುಷ್ಟಿಯಂತೆ—ವಿಫಲವಾಗುವುದು. (ಅಂತಃಕರಣ ಶುದ್ಧಿ ಅವಶ್ಯ!)

ಸುಖದ ಬಗೆಗೆ ಯಾವುದನ್ನು ಪರಿಶ್ರಮಿಸಬೇಕೋ ಆ ದೇಹವನ್ನು ಜನರು ಅದೇಕೆ ಪುಷ್ಟಿಗೊಳಿಸುವರೋ! ಸಕ್ಕರೆಯನ್ನು ಬಯಸುವವರು ಕಬ್ಬಿನ ಕಾಂಡಗಳನ್ನು ಪೂಜಿಸುವುದಿಲ್ಲ. (ದೇಹಸುಖದಿಂದ ಆತ್ಮಸುಖವು ದೊರೆಯಲಾರದು.)

ಪ್ರಾಣಧಾರಿಯ ಮನಸ್ಸು ಪ್ರಾಣವಿಯೋಗ ಕಾಲದಲ್ಲಿ ಪ್ರಾಯಃಶಃ ಮೋಹಗೊಳ್ಳುತ್ತನೆ (ಸ್ಮೃತಿ ತಪ್ಪುತ್ತದೆ). ಪುಣ್ಯವಶಾತ್ ಹಾಗೆ ಮೋಹಗೊಳ್ಳದಿದ್ದರೆ, ಅವನು ಮಕ್ಕಳನ್ನು ನೆನೆಯುತ್ತಾ ಸಾಯುತ್ತಾನೆ! (ಸಾಯುವಾಗಲಾದರೂ ದೇವರನ್ನು ನೆನೆಯಬೇಕು.)

ಹೊಟ್ಟೆಯ ಹಸಿವನ್ನು ತಣಿಸಲು ಸಂಸಾರವೆಂಬ ಹೆಸರಿನ ಕಡಲಲ್ಲಿ ಜನರು ಮುಳುಗುತ್ತಾರೆ. ಮಂಜಿನ ವ್ಯಥೆಯನ್ನು ಕಳೆಯಲು ಮನೆಗೆ ಬೆಂಕಿಯನ್ನು ಹೊತ್ತಿಸಬೇಡ!

ಹಣಗಳು ಸಂಪಾದಿಸಿದ್ದು ದಾನವಿತ್ತರೆ ಸುಖದ ಆಭಾಸವನ್ನು ಉಂಟುಮಾಡುತ್ತವೆ, ಹೆಚ್ಚಿನ ಮಟ್ಟಿಗೆ ತ್ಯಕ್ತವಾದರೆ ಪರಮಾನಂದಕ್ಕೆ ಕಾರಣಗಳಾಗುತ್ತವೆ. (ನಿರಾಶೆಯೇ ಪರಮಾನಂದವಾದುದು.)

ಅಧಿಕವಾದ ಹಣಗಳಿಗೆ ರಾಜನಿಂದಲೋ ಕಳ್ಳನಿಂದಲೋ ನಾಶವದೆ. ಅನ್ನವೂ ಹೆಚ್ಚು ತಿಂದರೆ ವಾಂತಿಯೋ ಭೇದಿಯೋ ಆಗುತ್ತದೆ.

ಪುರುಷನು (ಜೀವಿಯು) ಆಸೆಯ ವಶನಾಗಿದ್ದರೆ ಪಿಶಾಚಿಯಿಂದ ಆವೇಶಗೊಂಡವನಂತೆ ಮಣಿಯುತ್ತಾನೆ, ಸಂತೈಸುತ್ತಾನೆ, ಪೂಜಮಾಡುತ್ತಾನೆ, ಸದಾ ಸುತ್ತುತ್ತಿದ್ದಾನೆ.

ತಾಯಿ ತಂದೆಯರು, ತಮ್ಮ ಜನನದ ಅದೃಷ್ಟದಿಂದ ಮಕ್ಕಳೂ, ವಿಧಿವಶದಿಂದ ಅಳಿಯಂದಿರೂ, ಕಲಹವಿಲ್ಲದಿರುವಿಕೆಯಿಂದಾಗಿ ಬಂಧುಗಳೂ ಯಾರೆಂದು ನಿರ್ಣಯಿಸುತ್ತಾರಾದರೆ, (ಮಕ್ಕಳು, ಅಳಿಯಂದಿರು, ಬಂಧುಗಳು ಒಳ್ಳೆಯವರಾಗಬೇಕೆಂದು) ಹೋಮಿಸುವುದೇಕೆ?

ತನ್ನ ತಂದೆಯ ಪರಲೋಕಕ್ಕಾಗಿ ತಾನು ಪ್ರತಿದಿನವೂ ಯಾವುದನ್ನು ಆಚರಿಸುತ್ತಾನೋ ಇದನ್ನೇ ತಾನೂ ಹೋಲಿಕೆಗೊಳ್ಳಲಿ, ಪುತ್ರನ ವೈರಾಗ್ಯಕ್ಕೆ ಇದು ಸಾಕಾಗದೇ? (ತಂದೆಗಾಗಿ ಧರ್ಮಮಾಡುವಂತೆ ತನಗಾಗಿಯೂ ಧರ್ಮ ಮಾಡಬೇಕು) ದಾರಿದ್ರ್ಯವೇ ಸೇರಿಬಂದಿಲ್ಲವಾದರೆ, ಬೇರೇನು ಲಕ್ಷಣವು ಸೇರಿದ್ದಾಗಿ ಕಾಣುತ್ತದೆ? ತನ್ನ ಇಚ್ಛೆಯು ಪೂರ್ತಿಕೆಯಾಗದಿದ್ದರೆ

ಬ್ರಹ್ಮನಿಂದ ಮೊದಲ್ಗೊಂಡು ಈ ಜಗತ್ತು ಲೋಭಿಯಾಗಿದೆ. (ದಾರಿದ್ರ್ಯವಿಲ್ಲದಿದ್ದರೆ ದಾನವೀಯಬೇಕು, ಇಚ್ಛಾಪೂರ್ತಿಯು ಬೇರೇನೂ ಆಗದು.)

ಧನಿಕತ್ವವೇ ಜಾತಿಯಲ್ಲ, ಯಾವನಿಗೆ ಯಾವುದಿಷ್ಟವೋ ಅದೇ ಆತನ ಧನವಾಗಿದೆ. ಅದರಂತೆ ಪಾಮರರಿಗೆ ಕಾಣುವ ದಾರಿದ್ರ್ಯವೇ ವಿದ್ವಾಂಸರ ಪಾಲಿಗೆ ಧನವಾಗಿದೆ. (ಧನ ಮಾತ್ರ ದೊಡ್ಡದಲ್ಲ, ಧನವಿಲ್ಲದಿದ್ದರೂ ವಿದ್ಯೆಯೇ ದೊಡ್ಡದು!)

ಆಸೆಯು ಸ್ವೀಕರಿಸಲ್ಪಡುವುದಾದರೆ ಸಮಸ್ತ ಜಗತ್ತು ಸ್ವೀಕರಣೀಯವದೆ. ಶಾಂತಿಯು ಸ್ವೀಕರಣೀಯವಾದರೆ ತನ್ನ ಆತ್ಮವೇ ತನಗೆ ಇರುವುದೋ ಇಲ್ಲವೋ ಹೇಳಲಳವಲ್ಲ! (ಧನವಿರುವುದಾದರೆ ಲೋಕದಲ್ಲಿ ಆಧಿಪತ್ಯವನ್ನು ನಡೆಸುವಷ್ಟು ಇರಬೇಕು. ಶಾಂತಿಯಿದ್ದರೆ ಆತ್ಮ ಮೋಕ್ಷವಾಗುತ್ತದೆ.)

ದಾತೃವನ್ನು ವಶಗೊಳಿಸುವುದು, ಅವನ ಪರಿವಾರವನ್ನು ಸಂತೈಸುವುದು, ಒಳಗಡೆ ನಾಚಿಕೆಪಡದಿರುವುದು, ಈ ತೆರದಲ್ಲಿ—ಅಸ್ತಿತ್ವವೇ ಇಲ್ಲದಂತೆ—ಇರುವುದು ಯಾವುದಕ್ಕೆ ಸರಿಕೆಯಾದುದು? ('ಬೇಡುವುದು ಬಲು ಕಷ್ಟ', ಅದರಿಂದ ಆತ್ಮಗೌರವ ಅಳಿಯುವುದು.)

ಅಂಗೈಯಷ್ಟು ಇರುವ ಹೊಟ್ಟೆಯನ್ನು ತುಂಬಿಸಲು ಇದೇತರ ಯತ್ನ? ಬೊಗಸೆಯಿಂದ ನೀರು ಕುಡಿಯಲು ಕೆರೆಯನ್ನು ಅಗೆಯಬೇಕೋ?

ಅರೆಜಾವದಷ್ಟು ಸೊಗಸುಮಾಡದಿದ್ದರೆ, ಎರಡು ಜಾವದಷ್ಟು ಹೊತ್ತು ಉಣ್ಣದಿದ್ದರೆ, ಸುಸ್ಪಷ್ಟವಾಗುವ ಈ ಶರೀರದ ಸೌಂದರ್ಯದಲ್ಲಿ ಮೂಢರು ಅದೆಷ್ಟು ಮೋಹಗೊಳ್ಳುತ್ತಾರೆ!

ನವತರುಣಿಯನ್ನು ಬಂಜೆಯೆಂದು ಹೇಳುತ್ತಾರೆ, ಬಹುಪುತ್ರವತಿಯನ್ನು ಮುದುಕಿಯೆಂದು ಬಿಡುತ್ತಾರೆ, ಕಡಿಮೆ ಮಕ್ಕಳುಳ್ಳವಳನ್ನು ಜರೆಯುತ್ತಾರೆ, ಕಾಮಿಗಳಿಗೆ ಯಾವ ಗೃಹಿಣಿಯು ರಮ್ಯಳು?

ಮದುವೆಯಾಗದವರು ಶೋಕವನ್ನು ತಳೆಯುತ್ತಾರೆ, ಮದುವೆಯಾದವರು ಇಬ್ಬರು ಹೆಂಡಿರಿಲ್ಲವೆಂದು ದುಃಖಿಸುತ್ತಾರೆ, ಇಬ್ಬರು ಹೆಂಡಿರುಳ್ಳವರಾದರೋ ಪರಸ್ತ್ರೀಯರಿಲ್ಲವೆಂದು ಮರುಗುತ್ತಾರೆ, ಸ್ತ್ರೀಯರಿಂದ ತೃಪ್ತರಾದವರನ್ನು ಕಾಣಲಾರೆವು! (ಸ್ತ್ರೀಸುಖಕ್ಕೆ ಮಿತಿಯಿಲ್ಲ!)

ಕಾಮನ ಆಜ್ಞೆಯನ್ನು ನಡೆಸಲು ಈ ಅಖಿಲ ಜಗತ್ತು ಒಂದೇ ತರನೆಂದು ಭಾವಿಸುತ್ತೇನೆ. ಅಡ್ಡಹಾಯುವ ಪಕ್ಷಿಗಳು, ಮನುಷ್ಯರು, ದೇವತೆಗಳು ಎಂಬೀ ಭೇದವು ಬೇರೆಡೆಗೆ ಮಾತ್ರ ಫಲಿಸುವುದು.

ವೀರ್ಯಸ್ಖಲನಕ್ಕೆ ಅದೊಂದು ಸ್ಥಾನವಾದ, ಮಲಮೂತ್ರಗಳನ್ನು ವಿಸರ್ಜಿಸುವ ಸ್ಥಲವಾದ, ಸ್ತ್ರೀಯರೆಂಬುದನ್ನು ವಿಧಿಯು ಮಾಡಿದನು. ಅದೆಷ್ಟು ಜನರು ಅಲ್ಲಿ ಮುಳುಗುತ್ತಿಲ್ಲ? (ಕೇವಲ ವ್ಯಾಮೋಹ ಸಲ್ಲದು!)

ವಿಧಿವತ್ತಾಗಿ ವೇದಗಳನ್ನು ಪಠಿಸಿ, ಅದರ ಅರ್ಥವನ್ನು ಮೀಮಾಂಸೆ (ಜಿಜ್ಞಾಸೆ) ಮಾಡಿ, ಹೆಂಡಿರು ಕೈಗೊಳ್ಳಲ್ಪಡಬೇಕೆಂದು, ಅದಾವನು ಈ ಹಾಸ್ಯ ನಾಟಕವನ್ನು ಹೇಳಿದನೊ?

ವಿಮೂಢರಿಂದ ಉಪಭೋಗಿಸಲ್ಪಡತಕ್ಕ ಎಳೆಯ ಹೆಂಗಳು ದುಃಖದಿಂದ ಸಂಗ್ರಹಿಸಲ್ಪಡುತ್ತಾರೆ, ಪ್ರತಿದಿನವೂ ಪಾಲನೆ ಲಾಲನೆಗೊಳ್ಳುತ್ತಾರೆ. ಆದರೆ ಸುಖವು ಗುಣರಹಿತ— ವಿಯುಕ್ತವಾಗಿದೆ!

ಉಣ್ಣಿರಿ, ಕುಡಿಯಿರಿ, ತಿನ್ನಿರಿ, ಎಚ್ಚರಿರಿ, ಕೂರಿರಿ, ಏಳಿರಿ, ದಿನದ ಒಮ್ಮೆಯಾದರೂ 'ದೇಹಬಂಧವು ಅವಧಿಯುಕ್ತವಾದುದೆಂದು' ನೆನೆಯಿರಿ

ಸಾಯಬೇಕೆಂದು ಬ್ರಹ್ಮನು ಬರೆದಿರಲಾಗಿ, ಭೂಮಿ ಗೆದ್ದೇನು ಫಲ? ಕೈಯಲ್ಲಿದ್ದ ಚಿನ್ನದ ಬೆಟ್ಟದಿಂದೇನು ಫಲ? ಉತ್ತಮ ಸ್ತ್ರೀಯರಿಂದ ಅದೇನು ಫಲವಿದೆ?

ಕೆಲವೇ ನಿಮಿಷಗಳಲ್ಲಿ ಬದುಕುತ್ತಾನೆ, ಆಗ ಕೆಲವೇ ನಿಮಿಷಗಳಲ್ಲಿ ಶ್ರುತಿಗಳನ್ನು ಓದಿದವನಂತಿದ್ದಾನೆ. ಅಷ್ಟರಲ್ಲಿ ಆಕೆ ಗಲಿಬಿಲಿಗೊಳಿಸುವಳು, ಹೊಸತು ತಂತ್ರಗಳನ್ನು ಮಾಡುತ್ತಿದ್ದಾನೆ!

ಜೀವನಕಾಲವೂ ಸ್ವಲ್ಪವು, ಬುದ್ಧಿಯೂ ಸ್ವಲ್ಪವು, ಪರಿಚಯವೂ ಸ್ವಲ್ಪವು! ಅದನ್ನೂ ಹೇಗಾದರೂ ದಾಟಬಹುದು, ಶ್ರುತಿಗಳು ಹುಟ್ಟಿಲ್ಲವಾದರೆ. (ಶ್ರುತಿಗಳು ಹುಟ್ಟಿ, ಸುಖಕ್ಕೆ 'ತೊಂದರೆಯಾಗುವುದಂತೆ!)

ಎಲ್ಲಿಂದ ಬಂದುದೆಂದು ತಿಳಿಯೆನು, ಎಲ್ಲಿಗೆ ಹೋಗಬೇಕೆಂಬುದನ್ನೂ ತಿಳಿಯೆನು, ಎಂಬಾಗ ಕಗ್ಗತ್ತಲೆಯುಳ್ಳ ಸಂಸಾರವೆಂಬ ಪಥದಲ್ಲಿ ಇದೀಗ ಅದೆಲ್ಲಿ ಸಂಚರಿಸುವಿ?

ಮೂಢರು ಕತ್ತಲೆಯಿಂದ ಮುತ್ತಿದವರಾಗಿ ಚರಿಸುತ್ತಾ ಹತ್ತಿರಕ್ಕೂ ದೂರಕ್ಕೂ ಅರ್ಥಗಳನ್ನೂ ಒಯ್ಯುತ್ತಿಲ್ಲ, ತಲೆಗೆ ಸಿಡಿಲು ಬಡಿದಾಗ ಅಸ್ಪಷ್ಟವಾಗಿ ಅರ್ಥಗಳನ್ನು ತಳ್ಳುತ್ತಿರುವವರು. (ಸುಖವಿರುವಾಗ ಸತ್ಥರ್ಮಕ್ಕಾಗಿ ಅದೇನೂ ಯೋಚಿಸರು, ದುಃಖದಿಂದ ಕಂಗಾಲಾಗುವರು.)

ಇಲ್ಲಿನ ತರುಣಿಯರು ಕಣ್ಣುರೆಪ್ಪೆ ಮುಚ್ಚುತ್ತಾರೆ, ಅಲ್ಲಿನ ತರುಣಿಯರು ರೆಪ್ಪೆ ಮುಚ್ಚುವುದಿಲ್ಲ; ಇಷ್ಟೇ ವಿಶೇಷವಲ್ಲದೆ, ಸ್ವರ್ಗ ಸ್ವರ್ಗವೆಂದರೆ ಅಲ್ಲಿ ಬೇರೇನಿದೆ? (ಸ್ವರ್ಗಕ್ಕಾಗಿ ತಪಿಸುವವರಿಗೆ ಪ್ರತ್ಯೇಕ ಹೇಳಿಕೆಯಿದು!)

ಅಗಸ್ತ್ಯನ ಕೋಪವೂ, ಗೌತಮಮುನಿಯ ಶಾಪವೂ ಒಮ್ಮೆ ನೆನಪಿಗೆ ಬಂದರೆ, ಶತ್ರುವಿಗಾದರೂ ಇಂದ್ರಪದವಿ ಬೇಡ. ಪುರುಷನು ಅಮರಾವತಿಗೆ ಹೋಗಲಿ, ಬ್ರಹ್ಮನ ನಗರಿಗೆ ಹೋಗಲಿ, ಪುನರಪಿ ಮರಳಿ ಬರಬೇಕಾದರೆ, ಅದೇನು ಸಾಧಿತವಾದಂತಾಯ್ತು?

ಹಲವು ಹೆಂಡಿರನ್ನು ಭೋಗಿಸಿಯಾಯ್ತು, ಮಕ್ಕಳನ್ನು ಮೊಮ್ಮಕ್ಕಳನ್ನು ಪಡೆದುದಾಯ್ತು, ನೂರು ವರುಷವೂ ಕಳಿದುದಾಯ್ತು; ಸತ್ಯವಾಗಿ ಹೇಳು, ಸಾಯಲು ಮನಸ್ಸಿದೆಯೋ?

ವಿಯೋಗದ ಸ್ವಭಾವವುಳ್ಳ ವಿಷಯಗಳನ್ನು ಕಾಣುತ್ತಾ ಅದಾರು ಅವುಗಳಲ್ಲಿ ಮಮತೆಯನ್ನು ಮಾಡಲಾಪನು? ಸಾಯುವ ಅವಸ್ಥೆಯನ್ನು ಹೊಂದಿದ ಕುದುರೆಯನ್ನು ಹಣಗಳಿಂದ ಯಾರು ಕೊಳ್ಳುವನು?

ಅನ್ನವಿಲ್ಲದಿದ್ದರೆ ಮರಣವು, ಬತ್ತಗಳಿಂದ ಅನ್ನವು, ಬತ್ತಗಳು ಮಳೆಯಿಂದ, ಮಳೆಯು ತಪಸ್ಸಿಂದ ಎನ್ನುತ್ತಾ, ಇನ್ನಾದರೂ ಮರಣರಾಹಿತ್ಯಕ್ಕಾಗಿ ಅಂತಹ ತಪಸ್ಸನ್ನು ನಾನು ಆಚರಿಸಬೇಕು!

ಜನರು ಮನಸ್ಸನ್ನು ನಿಗ್ರಹಿಸುವುದಿಲ್ಲವೇ? ಶಿವನನ್ನು ಮರೆಹೊಕ್ಕು ಭಜಿಸುವುದಿಲ್ಲವೇ? ಸಂಧಿಸುವುದು ಹಾಗೂ ಛೇದಿಸುವುದನ್ನು ಮಾತ್ರ ಮೋಕ್ಷೋಪಾಯದಿಂದ ಕಟ್ಟುತ್ತಾರೆ.

ಈ ಶರೀರವು ಮೂಢನಿಗೆ ಭೋಗಿಸಲಿಕ್ಕೂ, ವಿವೇಕಿಗಳಿಗೆ ಯೋಗಕ್ಕಾಗಿಯೂ ಸಲುತ್ತದೆ. ದುರ್ವಿಧಿಯವರಿಗೋ ಭೋಗಕ್ಕೂ, ಯೋಗಕ್ಕೂ ಇದು ಸಲ್ಲುವುದಿಲ್ಲ.

ಪ್ರಾಚೀನ ಮುನಿಯೊಬ್ಬನು ಮಹಾಪಥಿಕರನ್ನು ಬ್ರಾಹ್ಮಣ ಚಾಂಡಾಲರೆಂದು ಹೇಳಿದ್ದನು. ಅದು ಶಿವನ ಮಾರ್ಗದ ಮಹಾಪಥಿಕರನ್ನು ಕುರಿತು (ಅಡ್ಡ ಹಾಯುವವರಿಗೆ) ಹಾಗೆಂದುದು!

ಲೋಕದಲ್ಲಿ ಬ್ರಹ್ಮನೆಡೆಡ ಇವಿಷ್ಟು ಕಣಗಳು—ಒಂದಿ[illegible]ಷ್ಟು ಅರಸರಲ್ಲಿರುವುದು, ದೇವರುಗಳಲ್ಲಿ ಎರಡು ಮೂರು, ಬ್ರಹ್ಮನಲ್ಲಿ ಆಯ್ದಾರು ಮಾತ್ರ—ಇವೆ!

ಅಜ್ಞಾನದಿಂದ ವಿಜ್ಞಾನವು ಮುಚ್ಚಿರಲು ಅದೇನು ಕೆಲಸವನು ಮಾಡಲಾಪನು? ಕಣ್ಣು ಕತ್ತಲೆಯಿಂದ ಹಿಡಿದು ಕಾಣಿಸಿರಲು, ಮುಖವನ್ನು ಕಾಣಲಾಗುವುದೇ?

ಅತಿಕಲುಷವಾದ, ಶೀಘ್ರನಾಶವಾಗುವ, ಕಾಣುವಂತೆ ಮಾತ್ರ ಹೊಳೆವ, ಇಚ್ಛೆಯನ್ನು ಒದವಿಸದ, ಜ್ಞಾನವೆಂಬ ಮಿಂಚುಹುಳವನ್ನು ಹೊಂದಿಯಾದರೂ ಜನರು ಅನೆಂತು ಸಂತಸಗೊಳ್ಳುವರು! (ಜ್ಞಾನವು ಶುದ್ಧವಾಗಿರಬೇಕು.)

ಜನರು ಪ್ರಾಕೃತವಾದ ಸುಖಕ್ಕಾಗಿ ಅಯ್ಯೋ ಲಕ್ಷ-ಸಾವಿರಗಳನ್ನು ಕೊಡಲಿರುವರು. ಆ ಮೂಢರು ಅಯ್ಯಾರು ಬಿಲ್ವಪತ್ರಗಳಿಂದ ಅರ್ಚಿಸಿದರೆ ಸಾಕು, ಮೋಕ್ಷವನ್ನು ಕ್ರಯಕ್ಕೆ ಪಡೆಯಬಹುದು.)

ಜನರು ಯಾವನಕ ಚೇಷ್ಟೆಮಾಡುತ್ತಿರುವರೋ ಅದು ತನಕ ಪಾಶದಲ್ಲಿ ಗಂಟುಕಟ್ಟಿಯೇ ಇರುತ್ತದೆ. ಅವರು ಸುಮ್ಮನಿರುತ್ತಾರಾದರೆ, ಕಾಲದಿಂದಲೇ ಪಾಶವು ಕಳಚಿಹೋಗುತ್ತದೆ.

ಮುನಿಗಳು ಶ್ವಾಸಗಳನ್ನು ತಡೆದಿಡುತ್ತಾರೆ, ಉಣ್ಣುವುದಿಲ್ಲ, ಕುಡಿಯುವುದಿಲ್ಲ, ಸಜ್ಜನರಿಂದ ಹೊಗಳಿಸಿಕೊಳ್ಳುತ್ತಾರೆ. ಇವರು ಕುತ್ತಿಗೆಯಲ್ಲಿ ಚಿನ್ನದ ಪಾಶವನ್ನು ಅಳವಡಿಸಿದ್ದಾರೇನು?

ಜನರು ಕೈಲಾಸದ ವಿಲಾಸದ ವರ್ಣನೆಯ ಕಾಲದಲ್ಲಿ ಚೆನ್ನಾಗಿ ಹೆಮ್ಮೆಪಡುತ್ತಾರೆ. ಪರಲೋಕದ ಸಾಧನದ ಕಥೆಯ ಕಾಲದಲ್ಲಿ ಮೋರೆಗಳನ್ನು ಅಡ್ಡತಿರುಹುವರು.

ಜನವು ವಂಗರು ಹೇಗಿದ್ದಾರೆ, ಅಂಗದೇಶದವರು ಹೇಗಿದ್ದಾರೆಂದು ವ್ಯರ್ಥವಾಗಿ ದೇಶಗಳನ್ನು ಕುರಿತು ಪ್ರಶ್ನಿಸುವುದು. ಯಮನ ಪತ್ತನ ಹೇಗೆಂದು ಅದೊಬ್ಬನೂ ತಿಳಿಯಲೆಳಸುವುದಿಲ್ಲ!

ಮಮತೆಯು ಬಿಡತಕ್ಕದು. ಅದು ಬಿಡಲಾಗದಾದರೆ, ಮಮತೆಯು ಮಾಡತಕ್ಕದು. ಆದರೆ, ಅದು ಎಲ್ಲೆಡೆ ಮಾಡತಕ್ಕದು! (ಕೆಲವೆಡೆ ಮಮತೆ, ಕೆಲವೆಡೆ ದ್ವೇಷ ಸಲ್ಲದು)

ಮೂರ್ಖನು ತಾನು ಪೋಷಿಸುವ ಜನರನ್ನು ಮಕ್ಕಳೆಂದೋ ಹೆಂಡಿರೆಂದೋ ಹೇಳುತ್ತಾನೆ. ಅಂಧತಮಸ್ಸಿನಲ್ಲಿ ಮುಳುಗುತ್ತಿರುವ ತಾನು (ಯಾರಿಂದ) ಪೋಷಿಸಲ್ಪಡತಕ್ಕವನೆಂದು ತಿಳಿಯುವುದಿಲ್ಲ!

ಗರ್ಭದಲ್ಲಿರುವಾಗ ಆವುದು ಚಿಂತಿತವಾಯ್ತೋ, ನರಕದಲ್ಲಿ ಇರುವಾಗ ಯಾವುದು ಬಹುಕಾಲ ಚಿಂತಿತವಾಯ್ತೋ, ಅದೆಲ್ಲವೂ ವಿಷಯಗಳೆಂಬ ಗಾಳಿಯ ಸಂಪರ್ಕದಿಂದ ಒಂದೇ ಬಾರಿಗೆ ಶುದ್ಧಿಯಾಗಿ ತೊಲಗಿಕೊಂಡಿತು. (ಗರ್ಭವಾಸ, ನರಕವಾಸಗಳಲ್ಲಿ ಜೀವನು ದೇವನನ್ನು ಮೊರೆಹೊಗುವನು, ವಿಷಯಾಸಿಲದಿಂದ ಆದು ಹಾರಿಹೋಯಿತು).

ಪ್ರಾಣದ ಶ್ವಾಸಲಕ್ಷಣದ ವರ್ತನೆಯು ಹೊರಗೆ ಹೋಗಿಬರುವ ಶೀಲವುಳ್ಳದಾಗಿ, ಜಾರಿಣಿಯು ಮುಗ್ಧಳಾದ ಕುಲಸ್ತ್ರೀಯನ್ನೆಂಬಂತೆ ಮನಸ್ಸಿನ ವೃತ್ತಿ (ಸ್ಥಿತಿ)ಯನ್ನು ಸೆಳೆಯುತ್ತದೆ.

ಅತಿ ಗಂಭೀರವಾದ ಕಲುಷಿತವಾಗದ, ಕದಡದ ತಡಿಯನ್ನು ಕಾಣಲಾಗದ, ದಾಟಲಾಗದ, ನಿರಂತರವಾದ ತೆರೆಗಳ ಸಮೂಹವುಳ್ಳ, ಮಹಾತ್ಮರ ವಿಜ್ಞಾನದ ಸಾಗರವನ್ನು ಕಂಡುದಾಯ್ತು!

ಘೋರವಾದ ಸಂಸಾರವನ್ನು ಬಿಡಿಸಿಕೊಳ್ಳಲು ಕೆಲವರು ಅಘೋರ (ರುದ್ರ)ನನ್ನು ಮರೆಹೊಗುವರು. ಜನನಾದಿಗಳಿಂದ ಹೆದರಿದವರಿಗೆ ಶಂಭುವಿನ ಶಕ್ತಿಯೇ ಆಶ್ರಯವಾಗಿದೆ.

ಈ ಪಾಶವು ಬಿಡಲ್ಪಡಬೇಕಾದರೆ, ಪಶುಪತಿಯೇ ಮೊರೆಹೊಗತಕ್ಕವನು. ಹಾಗಲ್ಲದೆ, ಪಾಶದಿಂದ ಕಟ್ಟಲ್ಪಟ್ಟ ಪಶುಗಳು ಎಂದೂ ಮೋಚನೆಗೊಳ್ಳರು(ಜೀವಿಗಳು ಪಶುಗಳೆಂದೂ, ದೇವನು ಪಶುಪತಿಯೆಂದೂ ಹೇಳಿದೆ).

ಅನುಭವಿಸಿದ ತಾಯಿಯರಿಂದ ಸಾಕಾಯಿತು, ತಂದೆಯಂದಿರಿಂದಲೂ ಸಾಕಾದುದು. ಅವಶ್ಯವಾಗಿದ್ದರೆ, ತಾಯಿತಂದೆಯರಿಂದ ನಿತ್ಯವಾದ ಅರ್ಥವನ್ನು ಹೊಂದುವುದಾಗಲಿ.

ಬಹುದೇವತೆಗಳುಳ್ಳವರು ಧನ್ಯರೇ ಸೈ! ಅವರಿಗೆ ಸ್ವಾಮಿಯಲ್ಲಿ—ಒಬ್ಬನಲ್ಲಿ ಇಲ್ಲವಾದರೆ ಇನ್ನೊಬ್ಬರಲ್ಲಿ—ದುರ್ಭಿಕ್ಷೆಯಿರುವುದಿಲ್ಲ. ನಾವೆ ಅಂತಹ ಪೂರ್ಣನಾದ ಒಬ್ಬ ದೇವನನ್ನೂ—ಯಾವಾಗಲೂ ತಿಳಿದಿಲ್ಲ! (ಬಹುದೇವತೆಗಳಿಗಿಂತಲೂ ಒಬ್ಬನನ್ನೇ ಹೊಂದಿರಬೇಕು!)

ದೊಡ್ಡ ದೊಡ್ಡ ದೇವರುಗಳಿರಲಿ, ಅವರನ್ನು ನಮಸ್ಕರಿಸಲು ಮನಸ್ಸು ಒಡಂಬಡುವುದಿಲ್ಲ. 'ಅಧ್ಯನೂ ದಾನಶೀಲನೂ' ಎಂಬ ನ್ಯಾಯದಂತೆ ಮನಸ್ಸಿನಲ್ಲಿ ನಾನು ಮೃತ್ಯುಂಜಯನನ್ನೇ ಚಿಂತಿಸುವೆನು. (ಅಧ್ಯನೂ

ದಾನಶೀಲನೂ ವಿರಳ, ಮರಣರಾಹಿತ್ಯಕ್ಕಾಗಿ ರುದ್ರನನ್ನೇ ಹೊಂದಬೇಕು.) ನೀನು ವಿಷಯಸುಖವನ್ನು ನೆನೆಯುವೆ, ಆದರ ವಿಷಮವಾದ ಪರಿಪಾಕವನ್ನು ನೀನು ನೆನೆಯುವುದಿಲ್ಲ! ಆವನು ಕಟ್ಟಲೂ ಬಿಡಲೂ ತಕ್ಕವನೋ, ಅವನನ್ನು ತಾನೇ ಬಂಧುವೆಂದು ಚಿಂತಿಸು.

ಅಂತ್ಯಾಶ್ರಮ (ಸನ್ಯಾಸ)ದಲ್ಲಿರುವ ಪುರುಷರಿಗೆ ಗುರುಸೇವೆಯೇ ಸದನವು, ಪಂಚಾಕ್ಷರಿಯಃ ಪುರಶ್ಚರಣವೇ ಶರಣು, ಕಾಮಗಳ ತಡೆಯೇ ಧನವು ಆಗಿರುತ್ತವೆ.

ತಾಯಿತಂದೆಯರು ಯಾರು? ಮಗನು ಯಾರು? ಎನ್ನುತ್ತಾರೆ. ಪ್ರಪಂಚದ ಸ್ವಾಮಿ ಯಾರು? ಅಂದರೆ, ಪ್ರಪಂಚದ ಭೇದವು ವಿನಾಶವಾಗಲು—ಇದೇನೆಂದು ಪ್ರಶ್ನಿಸಲಾಗದವನೇ ಸ್ವಾಮಿಯು!

ದೈವವು ಆವುದನ್ನು ನಿನಗೆ ವಿಧಿಸುತ್ತದೋ ಅದೇ ವಿಧಿಯು. ಆವುದರಿಂದ ಮರಳಿ ಬರುತ್ತವೋ ಅದೇ ನಿಷೇಧವು. ಶೈವ ಆಶ್ರಮದಲ್ಲಿರುವ ಧೀರರು ಏನೆನ್ನುವರೋ ಅದೇ ಉಪನಿಷತ್ತು!

ಅಸಾರವಾದ ಸಂಸಾರವನ್ನು ತ್ಯಜಿಸು, ಶರಣನಾದ ಗೌರೀರಮಣನನ್ನು ಭಜಿಸು, ವೇದಾಂತವನ್ನು ನಂಬಿರು, ಆದಾಗ ಈ ವಿಶ್ವವೇ ನಿನ್ನ ಅಜ್ಞೆಯನ್ನು ಮಾಡುವುದು!

ಬಲು ಮೂರ್ಖನಾದ ಬ್ರಹ್ಮನು ನಮಗೆ ಒಳ್ಳಿತನ್ನೋ ಕೆಡುಕನ್ನೋ ಬರೆದಿರಲಿ! ಆದರೆ ಮಹೇಶ್ವರನ ಬಲವೋ ಎಡವೋ ಕಾಲು ನಮಗೆ ಶರಣಾಗಲಿ!

ಬ್ರಹ್ಮನೆಂಬ ಹೇಗಿರುವನು? ವಿಷ್ಣುವು ಹೇಗಿದ್ದಾನೆಂಬ ಪ್ರಶ್ನೆಗೆ (ಉತ್ತರಿಸಲು) ನಾವು ಮೂಕರು. ಶಿವನೊಬ್ಬನನ್ನು ತಿಳಿದಿದ್ದೇವೆ. ಶಿವನಿಂದ ಬೇರೆಯವನನ್ನು ತಿಳಿಯೆವು!

ಅಸಿಪತ್ರವನವು ಕಠಿನವು, ಅಂಧತಮಸ್ಸು ಕಠಿಣತಮವು. ಅದರಿಂದಾಗಿ ನಮಗೇನು ಬಾಧೆ? ಬ್ರಹ್ಮನಿಂದ ತೊಡಗಿ ನಾವು ಶೈವರು!

ಘೋರ[illegible]ದಲ್ಲಿ ಕೃತದೀಕ್ಷೆಯುಳ್ಳ ಭರದ್ವಾಜನು ಕುಲದ ಮುಖ್ಯಸ್ಥನು. ವಿದ್ಯಾಧಿಪರಲ್ಲಿ ಬೇರೆ ಅಜ್ಞನಿಲ್ಲವೆಂದೂ ನಂಬಿಗೆಯಿದೆ. (ಕವಿಚರಿತೆಯಿಂದ.)

ಆವಾಗಲೂ ಜಗಳವಾಗದಿರಲೆಂದು ಶರೀರೈಕ್ಯವನ್ನು ತಾಳಿದ ಶಿವ ಶಿವೆಯರೊಳಗೆ—ನನ್ನ ಪಾಲಿನಲ್ಲಿ ತಾನು ಇದ್ದೇನೆ, ತಾನಿದ್ದೇನೆಂದು—ಕಲಹವಾದುದು!

ಈ ಮಾಹೇಶ್ವರ ಯೋಗವನ್ನು ಆಶ್ರಯಿಸಿದ ಕೆಲವರು ನರಕಕ್ಕೋಸುಗವಾದರೂ ಭೋಗಗಳನ್ನು ತಿಳಿಯರು, ನರಾಧಮನಿಗಾಗಿಯಾದರೂ ಬೇರೆ ದೇವತೆಗಳನ್ನು ತಿಳಿಯರು. (ಭೋಗಿಸುವುದು ನರಕಕ್ಕಾಗಿ, ಅನ್ಯ ಮೇಳಾಶ್ರಯಿಯು ನರಾಧಮನು!)

ಪ್ರಿಯ ಬಾಲರೇ! ವಿಷಯವನ್ನು ತಿಳಿಯಲೂ ಬಿಡಲೂ, ಆತ್ಮನನ್ನು ಗ್ರಹಿಸಲು ಕೇಳಲೂ, ತಿಳಿಯಲೂ, ಶಕ್ಯವಿಲ್ಲಾದರೆ, ಅವಿಮುಕ್ತನಿಗೆ (ಕಾಶಿಯ ದೇವನಿಗೆ) ಸಾಧಿಸಿರಿ.

ಸಾಂಖ್ಯ, ಯೋಗ, ನಿಗಮಗಳು, ಭಕ್ತಿ, ಕರ್ಮ, ಪ್ರತೀತಿಗಳೆಂದು ಈ ಎಲ್ಲಾ ಒಂದೆಡೆಯಲ್ಲಿರಲಿ. ಅವಿಮುಕ್ತವೊಂದೇ ಒಂದೆಡೆಯಲ್ಲಿರಲಿ!

ಬದ್ಧನಾದವನು ಯಾರು ನಿನಗೆ ಉಪಾಯವನ್ನು ಹೇಳುತ್ತಾನೆ? ಮುಕ್ತನಾದವನು ಮುಕ್ತಿಯನ್ನು ತಿಳಿಯುವನು. ಅವಿಮುಕ್ತ (ಕಾಶೀ ಕ್ಷೇತ್ರ)ವನ್ನು ಹೋಗುವಿಯಾದರೆ, ಎಲ್ಲವನ್ನೂ ವಿಶ್ವೇಶ್ವರನ ಮುಖದಿಂದಲೇ ತಿಳಿಯುವಿ!

ಶ್ರುತಿಯ ಹೃದಯ (ಸಾರ) ಗ್ರಹಿಸಲ್ಲ, ಚಂಚಲ ಹೃದಯವನ್ನು ಗ್ರಹಿಸಿಲ್ಲವೆಂದಿಲ್ಲ; ಉತ್ತಮ ಸ್ಥಾನವನ್ನು ಬಯಸುವೆನು, ವಿಶ್ವನಾಥನ ಪುರಿಗೆ ಹೋಗುವೆನು! (101 ಶ್ಲೋಕ) (ಕವಿಯು ಕಾಶಿಯತ್ತ ಬರೆದಿದ್ದಾನೆ!)—ಎಂಬಲ್ಲಿಗೆ ಅಪ್ಪಯ್ಯ ದೀಕ್ಷಿತ ರಚಿತ ವೈರಾಗ್ಯಶತಕ ಮುಗಿಯಿತು.



## ಕನ್ನಡ ನಾಡಿನಲ್ಲಿ ನಮ್ಮ ಶಾಖೆಗಳು:

1) ಅಂಕೋಲ; 2) ಅರಸಿಕೆರೆ; 3) ಬಾದಾಮಿ; 4) ಬಾಗಲಕೋಟೆ; 5) ಬೆಂಗಳೂರು—ಕೆಂಟೋನ್ಮೆಂಟ್, 6) ಚಿಕ್ಕಪೇಟೆ, 7) ಗಾಂಧೀನಗರ, 8) ನ್ಯೂತರಗುಪೇಟೆ, 9) ಶೇಷಾದ್ರಿಪುರಂ; 10) ಬೆಳ್ಗಾಂವ್—ಕೇಂಪ್, 11) ಗಣಪತಿಗಲ್ಲಿ, 12) ಶಾಪುರ 13) ಬಳ್ಳಾರಿ; 14) ಬಿಜಾಪುರ; 15) ಭಟ್ಕಳ; 16) ಬ್ರಹ್ಮಾವರ; 17) ಬ್ಯಾಡಗಿ 18) ಚಾಮರಾಜನಗರ; 19) ಚಿಕ್ಕಮಗಳೂರು; 20) ಚಿತ್ರದುರ್ಗ; 21) ಕುಂದಾಪುರ; 22) ದಾವಣಗೆರೆ; 23) ಧಾರವಾಡ; 24) ದಾಂಡೇಲಿ; 25) ಗದಗ; 26) ಗಂಗಾವತಿ; 27) ಗೋಕರ್ಣ; 28) ಗುಲ್ಬರ್ಗ; 29) ಹೊನ್ನಾವರ; 30) ಹೊಸಪೇಟೆ; 31) ಗುಳೇದಗುಡ್ಡ; 32) ಹುಬ್ಬಳ್ಳಿ; 33) ಹುನಗುಂದ; 34) ಇಳ್ಕಲ್; 35) ಜಮಖಂಡಿ; 36) ಕಾರ್ಕಳ; 37) ಕಾರವಾರ; 38 ಕೊಪ್ಪ; 39) ಕಪ್ಪಲ; 40) ಕುಮಟ; 41) ಮಂಗಳೂರು—ಲೈಟ್‌ಹೌಸ್ ಹಿಲ್, 42) ಬಂದರ, 43) ಕಾರ್‌ಸ್ಟ್ರೀಟ್; 44) ಮೈಸೂರು; 45) ನಿಪ್ಪಾಣಿ; 46) ರಬಕವಿ; 47) ರಾಯಚೂರು; 48) ಸಾಗರ; 49) ಶಿವಮೊಗ್ಗ; 50) ಶಿರ್ಸಿ; 51) ಶೃಂಗೇರಿ; 52) ತಿಪಟೂರು; 53) ತುಮಕೂರು; 54) ಯಾದಗಿರಿ.

## ದ. ಕ. ಜಿಲ್ಲೆಯಲ್ಲಿ ನಮ್ಮ ಗ್ರಾಮೀಣ ಶಾಖೆಗಳು:

1) ಉಡುಪಿ–ಕಾರ್‌ಸ್ಟ್ರೀಟ್; 2) ಉಡುಪಿ–ಲೋಕಲ್ ಆಫೀಸು; 3) ಬೈಲೂರು; 4) ಬಂಟ್ವಾಳ; 5) ಬಾರ್ಕೂರು; 6) ಬಸ್ರೂರು; 7) ಬೆಳ್ತಂಗಡಿ; 8) ಬೈಂದೂರು; 9) ಬದಿಯಡ್ಕ; 0) ಗಂಗೊಳ್ಳಿ; 11) ಗುರುಪುರ; 12) ಹೆಬ್ರಿ; 13) ಕಡೆಕಾರು; 14) ಕೆಮ್ಮಣ್ಣು; 15) ಕಾಪು; 16) ಕಿನ್ನಿಗೋಳಿ; 17) ಮಲ್ಪೆ; 18) ಮಣಿಪಾಲ; 19) ಮೂಡಬಿದ್ರಿ; 20) ಮೂಲ್ಕಿ; 21) ನಿಟ್ಟೆ; 22) ಪಡುಬಿದ್ರೆ; 23) ಪೆಡಾ[illegible]; 24) ಫಲಿಮಾರು; 25) ಶಾಣೆಮಂಗಳೂರು; 26) ಪೆರ್ಡೂರು; 27) ಪುತ್ತೂರು; 28) ಸಾಲಿಗ್ರಾಮ; 29) ಶಂಕರನಾರಾಯಣ; 30) ಸುಳ್ಯ; 31) ಉಪ್ಪಿನಂಗಡಿ; 32) ವಿಟ್ಲ.

# — ಸಿಂಡಿಕೇಟ್ ಬೇಂಕ್ —

**ಒಟ್ಟು ಶಾಖೆಗಳು: 128.**

**ಒಟ್ಟು ವ್ಯವಹಾರ ಸಂಪತ್ತು ರೂ. 20 ಕೋಟಿಗೂ ಮಿಕ್ಕಿದೆ.**

**ದಿ ಕೆನರಾ ಇಂಡಸ್ಟ್ರಿಯಲ್ & ಬೇಂಕಿಂಗ್ ಸಿಂಡಿಕೇಟ್ ಲಿ.**

Edited, Printed & Published by K. V. Shenoy
at The Prabhat Printers Ltd., Mangalore.